# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **821** |
| ಸದಸ್ಯರ ಹೆಸರು | : | ಶ್ರೀಮತಿ ಭಾರತಿ ಶೆಟ್ಟಿ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 20.12.2021 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ<br>ಕನ್ನಡ ಮತ್ತು ಸಂಸ್ಕೃತಿ ಸಚಿವರು |

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಮನೆಗಳ ಛಾವಣಿಯ ಮೇಲೆ ವಿದ್ಯುತನ್ನು ಯಾವ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತಿದೆ; (ವಿವರ ಒದಗಿಸುವುದು) | ರಾಜ್ಯಾದ್ಯಂತ ಮನೆಗಳ ಮೇಲ್ಛಾವಣಿಗಳಲ್ಲಿ ಅಳವಡಿಸಲಾಗಿರುವ ಮೇಲ್ಛಾವಣಿ ಸೌರ ವಿದ್ಯುತ್ ಘಟಕಗಳಿಂದ ಉತ್ಪಾದಿಸಲಾದ ವಿದ್ಯುತ್ ಪ್ರಮಾಣದ ವಿದ್ಯುತ್ ಸರಬರಾಜು ಕಂಪನಿವಾರು ವಿವರಗಳು ಈ ಕೆಳಕಂಡಂತಿವೆ:- |

(ದ.ಲ.ಯೂ.ಗಳಲ್ಲಿ)

| ಕ್ರ. ಸಂ. | ಕಂಪನಿ ಹೆಸರು | 2019-20 | 2020-21 | 2021-22 (ನವೆಂಬರ್ 21 ಅಂತ್ಯಕ್ಕೆ) |
|---|---|---|---|---|
| 1 | ಬೆಸ್ಕಾಂ | 5.64 | 5.27 | 4.58 |
| 2 | ಮೆಸ್ಕಾಂ | 4.63 | 5.93 | 4.01 |
| 3 | ಸೆಸ್ಕ್ | 2.95 | 4.55 | 3.57 |
| 4 | ಹೆಸ್ಕಾಂ | 2.66 | 2.98 | 2.3 |
| 5 | ಜೆಸ್ಕಾಂ | 2.47 | 2.20 | 0.98 |

| | ಪ್ರಶ್ನೆ | ಉತ್ತರ |
|---|---|---|
| ಆ) | ಕರ್ನಾಟಕದಲ್ಲಿ ಮನೆಗಳ ಛಾವಣಿಯ ಮೇಲೆ ಉತ್ಪಾದಿಸಬಹುದಾದ ವಿದ್ಯುತ್ ಸಾಮರ್ಥ್ಯವೆಷ್ಟು; ಈ ಸಾಮರ್ಥ್ಯದ ಗುರಿ ಮುಟ್ಟಲು ಸರ್ಕಾರ ರೂಪಿಸಿಕೊಂಡಿರುವ ಯೋಜನೆಗಳೇನು; | ಮೇಲ್ಛಾವಣಿ ಸೌರ ವಿದ್ಯುತ್ ಉತ್ಪಾದನೆ ಉತ್ತೇಜಿಸಲು, ದಿನಾಂಕ: 22.05.2014 ರಂದು ಕರ್ನಾಟಕ ಸರ್ಕಾರ ಸೋಲಾರ್ ನೀತಿ 2014-21ನ್ನು ಜಾರಿಗೊಳಿಸಿದ್ದು, ರಾಜ್ಯದಲ್ಲಿ 2400 ಮೆ.ವ್ಯಾ ಮೇಲ್ಛಾವಣಿ ಸೌರಶಕ್ತಿ ಮುಖಾಂತರ ವಿದ್ಯುತ್ ಉತ್ಪಾದನೆ ಮಾಡಲು ಗುರಿ ನಿಗದಿಪಡಿಸಿರುತ್ತಾರೆ ಹಾಗೂ ಪ್ರತ್ಯೇಕವಾಗಿ ಮನೆಗಳಿಗೆ ಯಾವುದೇ ಗುರಿ ನಿಗದಿಪಡಿಸಿರುವುದಿಲ್ಲ.<br>ಗೃಹಬಳಕೆ, ಕೈಗಾರಿಕಾ, ವಾಣಿಜ್ಯ ಮತ್ತು ಇತರೆ ಗ್ರಾಹಕರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.<br>ಗ್ರಾಹಕರು, ನೆಟ್ ಮೀಟರಿಂಗ್ ವ್ಯವಸ್ಥೆಯಲ್ಲಿ ಮೇಲ್ಛಾವಣಿ ಸೌರ ವಿದ್ಯುತ್ ಘಟಕಗಳಿಂದ ಉತ್ಪಾದಿಸಿರುವ ವಿದ್ಯುತ್‌ನ್ನು ಸ್ವಂತ ಬಳಕೆಯ ನಂತರ ಉಳಿದ ವಿದ್ಯುತ್‌ನ್ನು ಹಾಗೂ ಗ್ರಾಸ್ ಮೀಟರಿಂಗ್ ವ್ಯವಸ್ಥೆಯಲ್ಲಿ ಉತ್ಪಾದಿಸಿರುವ ಒಟ್ಟು ವಿದ್ಯುತ್‌ನ್ನು, ವಿದ್ಯುತ್ ವಿತರಣಾ ಕಂಪನಿಗಳಿಗೆ ಕೆ.ಇ.ಆರ್.ಸಿ ರವರು ನಿಗದಿ ಪಡಿಸಿದ ದರದಲ್ಲಿ ಮಾರಾಟ ಮಾಡಬಹುದಾಗಿದೆ. ವಿದ್ಯುತ್ ವಿತರಣಾ ಕಂಪನಿಗಳು ಗ್ರಾಹಕರೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು 25 ವರ್ಷಗಳಿಗೆ ಮಾಡಿಕೊಳ್ಳಲಾಗುತ್ತಿದೆ.<br>ಸೌರ ವಿದ್ಯುತ್ ಉತ್ಪಾದನೆಗೆ ಹೆಚ್ಚು ಒತ್ತು ನೀಡಲು ಕೆ.ಇ.ಆರ್.ಸಿ. ರವರು ಹಾಲಿ ಚಾಲ್ತಿಯಲ್ಲಿರುವ ಗ್ರಾಹಕರ ಹೂಡಿಕೆ ವ್ಯವಹಾರ |

| | | |
|---|---|---|
| | | ಮಾದರಿಯೊಂದಿಗೆ, ಮೂರನೇ ವ್ಯಕ್ತಿ ಹಾಗೂ ವಿದ್ಯುತ್ ವಿತರಣಾ ಕಂಪನಿಗಳು ಹೂಡಿಕೆ ಮಾಡಬಹುದೆಂದು ದಿನಾಂಕ 09.12.2019 ರಂದು ಆದೇಶವನ್ನು ಹೊರಡಿಸಿರುತ್ತಾರೆ. |
| ಇ) | ಸಂಪೂರ್ಣ ಸಾಮರ್ಥ್ಯದ ಗುರಿ ಮುಟ್ಟಲು ಸರ್ಕಾರದ ಮುಂದಿರುವ ಸವಾಲುಗಳೇನು;ಈ ಸವಾಲುಗಳನ್ನು ಎದುರಿಸಲು ಸರ್ಕಾರದ ಪ್ರಯತ್ನಗಳೇನು; | ಪ್ರಸ್ತುತ, ಪ್ರತಿ ನಾಗರೀಕರು ಕಡ್ಡಾಯವಾಗಿ ಗೃಹ ಬಳಕೆಯ ಅವಶ್ಯವಿರುವ ಸೌರ ವಿದ್ಯುತ್ ಘಟಕ ಸ್ಥಾಪಿಸಬೇಕೆನ್ನುವ ಆದೇಶ ಕಡ್ಡಾಯವಾಗಿರುವುದಿಲ್ಲ. ಸೌರ ಮೇಲ್ಛಾವಣಿ ಘಟಕ ಸ್ಥಾಪಿಸಿಕೊಳ್ಳುವುದು ಗ್ರಾಹಕರ ಇಚ್ಚೆಗೆ ಒಳಪಟ್ಟಿರುತ್ತದೆ. |
| ಈ) | ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರದ ನೀತಿ ಏನು; ಹಾಗೂ ರಾಜ್ಯಕ್ಕೆ ವಿಸ್ತರಿಸುತ್ತಿರುವ ಸೌಲಭ್ಯಗಳೇನು; ಈ ಬಗ್ಗೆ ಗ್ರಾಹಕರಿಗೆ ಯಾವ ರೀತಿಯಲ್ಲಿ ಜಾಗೃತಿ ಮಾಡಲಾಗುತ್ತಿದೆ? | ಭಾರತ ಸರ್ಕಾರ, ಎಮ್.ಎನ್.ಆರ್.ಇ (ಹಂತ-2) ರವರಿಂದ ವಸತಿ ಕಟ್ಟಡಗಳು ಮತ್ತು ಗುಂಪು ವಸತಿ ಸಮುದಾಯ (ಗು.ವ.ಸ)/ವಸತಿ ಕಲ್ಯಾಣ ಸಂಘದ (ವ.ಸ.ಕ) ಗ್ರಾಹಕರುಗಳಿಗೆ ಗ್ರಿಡ್ ಸಂಪರ್ಕಿತ ಸೌರಶಕ್ತಿ ಮೇಲ್ಛಾವಣಿ ಸ್ಥಾಪಿಸಲು ಸಹಾಯಧನದ ಯೋಜನೆಯನ್ನು ಜಾರಿಗೊಳಿಸಿದ್ದು, ನಿಗದಿತ ವೆಚ್ಚದ ಮೇಲೆ ಸಹಾಯಧನವನ್ನು ಈ ಕೆಳಕಂಡ ಶೇಕಡವಾರಂತೆ ವಿತರಿಸಲಾಗುವುದು:<br>• ವಸತಿ ಗ್ರಾಹಕರಿಗೆ 1 –3 ಕಿ.ವ್ಯಾ.ವರೆಗೆ – 40% ತದನಂತರ 3–10 ಕಿ.ವ್ಯಾ. ವರೆಗೆ – 20% ಮತ್ತು<br>• ಗುಂಪು ವಸತಿ ಸಮುದಾಯ (ಗು.ವ.ಸ)/ ವಸತಿ ಕಲ್ಯಾಣ ಸಂಘದ (ವ.ಕ.ಸ) ಗ್ರಾಹಕರಿಗೆ 1–10 ಕಿ.ವ್ಯಾ. ವರೆಗೆ – 20% ನ್ನು ನೀಡುತ್ತದೆ.<br>ಗೃಹಬಳಕೆ ಗ್ರಾಹಕರಿಂದ ಆನ್‌ಲೈನ್ ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಮೊದಲು ಬಂದವರಿಗೆ ಮೊದಲ ಆದ್ಯತೆ ಹಾಗೂ ತಾಂತ್ರಿಕ ಕಾರ್ಯ ಸಾಧ್ಯತೆಯ ಆಧಾರದ ಮೇಲೆ ಆಯ್ಕೆ ಪಟ್ಟಿಯನ್ನು ಮಾಡಲಾಗುವುದು. ಗ್ರಾಹಕರು ವಿದ್ಯುತ್ ಸರಬರಾಜು ಕಂಪನಿಗಳು ಆಯ್ಕೆ ಮಾಡಲಾದ ಇಪಿಸಿ (Engineering Procurement and Constructions) ಗುತ್ತಿಗೆದಾರರಿಂದ ಸೌರಶಕ್ತಿ ಮೇಲ್ಛಾವಣಿಯನ್ನು ಅನುಷ್ಠಾನಗೊಳಿಸಬೇಕಾಗಿರುತ್ತದೆ.<br>**ಗೃಹಬಳಕೆ ಗ್ರಾಹಕರಿಗೆ ಜಾಗೃತಿ ಮೂಡಿಸಲು ಕೈಗೊಂಡ ಕ್ರಮಗಳ ವಿವರಗಳು:**<br>• ಯೋಜನೆಯ ಬಗ್ಗೆ ಅಧಿಕೃತ ಜ್ಞಾಪನಾ ಪತ್ರಗಳು ಹಾಗೂ ಸುತ್ತೋಲೆಗಳನ್ನು ವಿದ್ಯುತ್ ಸರಬರಾಜು ಕಂಪನಿಗಳ ಅಂತರ್ಜಾಲಗಳಲ್ಲಿ ಹಾಗೂ ಆನ್‌ಲೈನ್ ಮೂಲಕವೇ ಅರ್ಜಿಗಳನ್ನು ಹಾಕಲು ಹಾಗೂ ನೋಂದಣಿ ಶುಲ್ಕ ಪಾವತಿಸಲು ಸರಳೀಕೃತ ಸಾಫ್ಟ್‌ವೇರ್ ಸಿದ್ದಪಡಿಸಲಾಗಿರುತ್ತದೆ.<br>• ದಿನಪತ್ರಿಕೆ, ಫೇಸ್‌ಬುಕ್, ದೂರದರ್ಶನ, ಬಿಗ್ ಎಫ್‌ಎಂ. ಮತ್ತು ಬಿತ್ತಿ ಪತ್ರಗಳ ಮೂಲಕ ಜಾಹೀರಾತುಗಳನ್ನು ನೀಡಲಾಗಿರುತ್ತದೆ. |

ಸಂಖ್ಯೆ: ಎನರ್ಜಿ 281 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು